# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : 441 |
| ಸದಸ್ಯರ ಹೆಸರು | : ಶ್ರೀ ಪಿ. ಆರ್. ರಮೇಶ್ (ನಾಮನಿರ್ದೇಶನ ಹೊಂದಿದವರು) |
| ಉತ್ತರಿಸಬೇಕಾದ ದಿನಾಂಕ | : 04.02.2021 |
| ಉತ್ತರಿಸುವ ಸಚಿವರು | : ಗೃಹ ಸಚಿವರು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | **ಬೆಂಗಳೂರು ನಗರವು ಟ್ರಾಫಿಕ್ ಸಂಚಾರ (ಸಂಚಾರ ದಟ್ಟಣೆಯ ಪ್ರಮಾಣದ) ವಿಷಯದಲ್ಲಿ ದೇಶದ 2ನೇ ನಗರವೆಂದು ಖಾಸಗಿ ಸಂಸ್ಥೆಯವರು ನಡೆಸಿದ ಸಮೀಕ್ಷೆಯ ವರದಿ ವಿಷಯವು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಸರ್ಕಾರದ ನಿಲುವೇನು ;** | ಹೌದು<br><br>ಬೆಂಗಳೂರು ನಗರದಲ್ಲಿ ಇತ್ತೀಚಿನ ದಿನಗಳಲ್ಲಿ ವಾಹನಗಳ ಸಂಖ್ಯೆ ಹೆಚ್ಚುತ್ತಿದ್ದು, ವಿಶೇಷವಾಗಿ ವೈಯಕ್ತಿಕ ಸಾರಿಗೆಯಲ್ಲಿ ತ್ವರಿತ ಏರಿಕೆ ಕಂಡಿರುತ್ತದೆ. ರಸ್ತೆಗಳ ಅಗಲೀಕರಣಗೊಳಿಸಲು ಹಲವು ನಿರ್ಭಂಧಗಳಿದ್ದು, ವಾಹನಗಳ ಹೆಚ್ಚಳದಿಂದಾಗಿ ಸರಾಸರಿ ವೇಗದಲ್ಲಿ ಗರಿಷ್ಠ ಸಂಚಾರ ಪರಿಸ್ಥಿತಿಗಳಲ್ಲಿ 10ಕಿ.ಮೀ ಗಿಂತಲೂ ಕಡಿಮೆಯಿರುತ್ತದೆ. ದಿನೇ ದಿನೇ ಹೆಚ್ಚುತ್ತಿರುವ ವಾಹನಗಳು ಮತ್ತು ರಸ್ತೆ ಅಗಲೀಕರಣದ ನಿರ್ಭಂಧದ ನಡುವೆ ವಾಹನ ಸಂಚಾರ ಸುಗಮಗೊಳಿಸಲು ಸರ್ಕಾರವು ಈ ಕೆಳಕಂಡ ಕ್ರಮಗಳನ್ನು ಕೈಗೊಂಡಿರುತ್ತದೆ.<br><br>1) ವಾಹನಗಳ ಸಂಚಾರ ಮತ್ತು ಸಂಚಾರ ಸುರಕ್ಷತಾ ಕ್ರಮಗಳಿಗೆ ಸಂಬಂಧಿಸಿದಂತೆ ಪೊಲೀಸ್ ಇಲಾಖೆ, ನಗರಾಭಿವೃದ್ಧಿ ಇಲಾಖೆ ಮತ್ತು ಸಾರಿಗೆ ಇಲಾಖೆಗಳೊಂದಿಗೆ ಸೂಕ್ತ ಸಮಾಲೋಚನೆ ನಡೆಸಿ ಕಾಲ ಕಾಲಕ್ಕೆ ಸೂಕ್ತ ನಿರ್ಣಯ ತೆಗೆದುಕೊಂಡು, ನಿರ್ದೇಶನ ನೀಡಲು ಗೃಹ ಸಚಿವರ ಅಧ್ಯಕ್ಷತೆಯಲ್ಲಿ Traffic Management Authority ಯನ್ನು ರಚಿಸಲಾಗಿದೆ.<br><br>2) ಈ ವಿಷಯಕ್ಕೆ ಸಂಬಂಧಿಸಿದಂತೆ, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯಲ್ಲಿ ರೂ.477.29 ಕೋಟಿಗಳ ಅಂದಾಜು ವೆಚ್ಚದಲ್ಲಿ 12 High Traffic Density |

| | | |
|---|---|---|
| | | Corridor ಗಳ ಅಭಿವೃದ್ಧಿ ಮತ್ತು ನಿರ್ವಹಣೆಯ ಕಾರ್ಯವನ್ನು ಅನುಷ್ಠಾನಗೊಳಿಸಲು ಅನುಮೋದನೆ ನೀಡಿ ಆದೇಶಿಸಲಾಗಿರುತ್ತದೆ.<br><br>3) ರಸ್ತೆ ಸುರಕ್ಷತಾ ಚಟುವಟಿಕೆಗಳಿಗಾಗಿ ರೂ. 100.00 ಕೋಟಿ ಮೊತ್ತದ ಕ್ರಿಯಾ ಯೋಜನೆಗೆ ಆಡಳಿತಾತ್ಮಕ ಅನುಮೋದನೆ ನೀಡಿ ಆದೇಶಿಸಲಾಗಿರುತ್ತದೆ. ಇದರಲ್ಲಿ ಶೇಖಡ 50ಕ್ಕಿಂತಲೂ ಹೆಚ್ಚಿನ ಮೊತ್ತವನ್ನು ಬೆಂಗಳೂರು ನಗರಕ್ಕೆ ಕಾಯ್ದಿರಿಸಿದೆ.<br><br>4) ಸಂಚಾರ ದಟ್ಟಣೆಯನ್ನು ನೀಗಿಸಲು ಈ ಕೆಳಕಂಡ ಕ್ರಮಗಳನ್ನು ಕೈಗೊಳ್ಳಲಾಗಿದೆ:-<br>❖ ಅತಿ ಹೆಚ್ಚು ಸಂಚಾರ ದಟ್ಟಣೆ ರಸ್ತೆಗಳಲ್ಲಿ ಏಕಮುಖ ಸಂಚಾರ ವ್ಯವಸ್ಥೆ<br>❖ ಪ್ರಮುಖ ರಸ್ತೆಗಳಲ್ಲಿ ವಾಹನಗಳ ನಿಲುಗಡೆ ನಿಷೇಧ<br>❖ ಬಲ ತಿರುವು ಮತ್ತು "ಯು" ತಿರುವುಗಳ ನಿಷೇಧ<br>❖ ಸಂಚಾರ ನಿರ್ವಹಣಾ ಕೇಂದ್ರದ ಸ್ಥಾಪನೆ<br>❖ ಸಂಚಾರ ನಿಯಂತ್ರಣ ಮತ್ತು ನಿರ್ವಹಣೆಗೆ ಗೃಹ ರಕ್ಷಕ ಸಿಬ್ಬಂದಿ ಮತ್ತು ಟ್ರಾಫಿಕ್ ವಾರ್ಡನ್‌ಗಳ ತೊಡಗಿಸಿಕೊಳ್ಳುವಿಕೆ<br>❖ ಸಿಗ್ನಲ್ ಫ್ರೀ ಕಾರಿಡಾರ್ ವ್ಯವಸ್ಥೆ<br>❖ ಮುಕ್ತ ಎಡ ತಿರುವು ವ್ಯವಸ್ಥೆ<br>❖ ಸಂಚಾರ ನಿಯಮ ಉಲ್ಲಂಘನೆ ಎಸಗುವವರ ವಿರುದ್ಧ ವಿಶೇಷ ಕಾರ್ಯಾಚರಣೆ<br>❖ ಪೆಲಿಕಾನ್ ಸಿಗ್ನಲ್ ಲೈಟ್ ಅಳವಡಿಕೆ<br>❖ ಸಂಚಾರ ಸೂಚನಾ ಫಲಕಗಳ ಅಳವಡಿಕೆ<br>❖ ಪ್ರತಿ ಸಂಚಾರ ಪೊಲೀಸ್ ಠಾಣೆಯಲ್ಲಿ ಮಾದರಿ ರಸ್ತೆಗಳು ಮತ್ತು ಝೀರೋ ಟಾಲರೆನ್ಸ್ ರಸ್ತೆಗಳ ಆಯ್ಕೆ<br>❖ ಸಂಚಾರ ನಿರ್ವಹಣೆಯಲ್ಲಿ ಆಧುನಿಕ ತಂತ್ರಜ್ಞಾನದ ಅಳವಡಿಕೆ<br>❖ ಅವೈಜ್ಞಾನಿಕ ರಸ್ತೆ ಉಬ್ಬುಗಳನ್ನು ತೆಗೆದು ವೈಜ್ಞಾನಿಕ ರಸ್ತೆ ಉಬ್ಬುಗಳ ನಿರ್ಮಾಣ<br>❖ ಸಂಪರ್ಕ ರಹಿತ ನಿಯಮ ಜಾರಿಗೆ ಹೆಚ್ಚು ಉತ್ತೇಜನ<br>❖ ಅಡ್ಡಾದಿಡ್ಡಿ ವಾಹನಗಳ ನಿಲುಗಡೆ ನಿಯಂತ್ರಣ<br>❖ ಅತಿವೇಗವಾಗಿ ಚಲಿಸುವ ವಾಹನಗಳಿಗೆ ನಿಯಂತ್ರಣ |

❖ ಅಪಾಯಕಾರಿ ರೀತಿಯಲ್ಲಿ ಚಲಿಸುವ ವಾಹನ ಚಾಲಕ/ಸವಾರರ ವಿರುದ್ಧ ಪರಿಣಾಮಕಾರಿ ಕ್ರಮ

❖ ಮದ್ಯಪಾನ ಮಾಡಿ ವಾಹನ ಚಾಲನೆ ಮಾಡುವವರ ವಿರುದ್ಧ ವಿಶೇಷ ಕಾರ್ಯಾಚರಣೆ

❖ ವ್ಹೀಲಿಂಗ್ & ಡ್ರ್ಯಾಗ್ ರೇಸ್ ಮಾಡುವವರ ವಿರುದ್ಧ ಕಠಿಣ ಕ್ರಮ

❖ ಗುರುತರ ಸಂಚಾರ ನಿಯಮ ಉಲ್ಲಂಘನೆ ಎಸಗುವ ಚಾಲಕ/ಸವಾರರ ಚಾಲನಾ ಅನುಜ್ಞಾ ಪತ್ರಗಳ ಅಮಾನತ್ತಿಗೆ ಕ್ರಮ.

**(ಆ) ಸರ್ಕಾರಿ/ಖಾಸಗಿ ಬಸ್ಸುಗಳ ಚಾಲಕರು ನಿರ್ದಿಷ್ಟವಾದ ಜಾಗದಲ್ಲಿ ತಮ್ಮ ವಾಹನಗಳನ್ನು ನಿಲುಗಡೆ ಮಾಡದೇ ರಸ್ತೆಯಲ್ಲಿ ಅಡ್ಡಾದಿಡ್ಡಿ ನಿಲುಗಡೆ ಮಾಡಿ ರಸ್ತೆ ಸಂಚಾರದ ನಿಯಮವನ್ನು ಉಲ್ಲಂಘಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಸರ್ಕಾರದ ಕ್ರಮವೇನು: (ಚಾಲ್ತಿಯಲ್ಲಿರುವ ಮಾನದಂಡಗಳ ಕುರಿತು ವಿವರ ನೀಡುವುದು)**

ಹೌದು.

ಕಳೆದ ಮೂರು ವರ್ಷಗಳಲ್ಲಿ ಸರ್ಕಾರಿ/ಖಾಸಗಿ ಬಸ್ಸುಗಳ ಚಾಲಕರು ನಿರ್ದಿಷ್ಟವಾದ ಜಾಗದಲ್ಲಿ ತಮ್ಮ ವಾಹನಗಳನ್ನು ನಿಲುಗಡೆ ಮಾಡದೇ ರಸ್ತೆಯಲ್ಲಿ ಅಡ್ಡಾದಿಡ್ಡಿ ನಿಲುಗಡೆ ಮಾಡಿ ನಿಯಮ ಉಲ್ಲಂಘಿಸಿದ್ದರ ಬಗ್ಗೆ ಮೋಟಾರು ವಾಹನ ಕಾಯ್ದೆ ಅಡಿಯಲ್ಲಿ ಈ ಕೆಳಕಂಡಂತೆ ಪ್ರಕರಣಗಳನ್ನು ದಾಖಲಿಸಲಾಗಿದೆ:-

| ವರ್ಷ | ಅಡ್ಡಾದಿಡ್ಡಿ ನಿಲುಗಡೆ ದಾಖಲಿಸಿದ ಪ್ರಕರಣಗಳು | |
|---|---|---|
| | ಸರ್ಕಾರಿ ಬಸ್ಸುಗಳು (ಬಿ.ಎಂ.ಟಿ.ಸಿ. ಮತ್ತು ಕೆ.ಎಸ್.ಆರ್.ಟಿ.ಸಿ.) | ಖಾಸಗಿ ಬಸ್ಸುಗಳು |
| 2018 | 7341 | 11913 |
| 2019 | 10246 | 10108 |
| 2020 | 6361 | 5385 |

ಬಿ.ಎಂ.ಟಿ.ಸಿ ಬಸ್ಸುಗಳನ್ನು ಚಾಲಕರು ಕಾರ್ಯಾಚರಣೆ ಸಮಯದಲ್ಲಿ ಎಸಗುವ;

❖ ಅಧಿಕೃತ ಬಸ್ ನಿಲ್ದಾಣಗಳಲ್ಲಿ ಬಸ್ಸುಗಳನ್ನು ನಿಲ್ಲಿಸದೆ ಮನಸೋ ಇಚ್ಛೆ ಎಲ್ಲೆಂದರಲ್ಲಿ ಅದರಲ್ಲೂ ಮುಖ್ಯ ರಸ್ತೆಗಳ ಮಧ್ಯೆದಲ್ಲಿಯೂ ಬಸ್ಸುಗಳನ್ನು ನಿಲ್ಲಿಸುವುದು.

❖ ಫ್ಲೈಓವರ್ ಪ್ರವೇಶ ಮತ್ತು ಮುಕ್ತಾಯ ಸ್ಥಳಗಳಲ್ಲಿ ಇತರೆ ವಾಹನಗಳ ಸಂಚಾರಕ್ಕೆ ಅಡ್ಡಿಯಾಗುವಂತೆ ಪ್ರಯಾಣಿಕರನ್ನು ಇಳಿಸಲು ಮತ್ತು ಹತ್ತಿಸಿಕೊಳ್ಳಲು ಬಸ್ಸುಗಳನ್ನು ನಿಲುಗಡೆ ಮಾಡುವುದು.

| | | |
|---|---|---|
| | | ❖ ಪ್ರಯಾಣಿಕರನ್ನು ಇಳಿಸಲು ಮತ್ತು ಹತ್ತಿಸಿಕೊಳ್ಳಲು ಎಲ್ಲೆಂದರಲ್ಲಿ ಬಸ್ಸುಗಳನ್ನು ನಿಲ್ಲಿಸಿ ಬಾಗಿಲುಗಳನ್ನು ತೆಗೆಯುವುದು.<br>❖ ಬಿ.ಎಂ.ಟಿ.ಸಿ ಬಸ್ಸುಗಳು ದುರಸ್ತಿಗೆ ಬಂದಲ್ಲಿ ಸಂಚಾರಕ್ಕೆ ಅಡಚಣೆಯಾಗದಂತೆ ರಸ್ತೆಯ ಮಧ್ಯೆದಲ್ಲಿಯೇ ನಿಲುಗಡೆ ಮಾಡುವುದು ಇತ್ಯಾದಿಗಳ ಬಗ್ಗೆ ಬಿ.ಎಂ.ಟಿ.ಸಿ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರ ಗಮನಕ್ಕೆ ತಂದು, ಚಾಲಕರುಗಳಿಗೆ ಸೂಕ್ತ ತಿಳುವಳಿಕೆ ನೀಡಲು ಕೋರಲಾಗಿರುತ್ತದೆ. |
| (ಇ) | **Peak hours ಅಂದರೆ ಬೆಳಿಗ್ಗೆ 9 ಗಂಟೆಯಿಂದ 11 ಗಂಟೆಯ ಅವಧಿಗೆ ಬೆಂಗಳೂರು ನಗರದ ಪ್ರಮುಖ ರಸ್ತೆಗಳಲ್ಲಿ ನಿಧಾನಗತಿಯಲ್ಲಿ ಚಲಿಸುವ ಮತ್ತು ಗೂಡ್ಸ್ ವಾಹನಗಳ ಸಂಚಾರಕ್ಕೆ ನಿರ್ಬಂಧ ವಿಧಿಸುವ ಹಾಗೂ ನಗರದ ಸಂಚಾರ ದಟ್ಟಣೆಯನ್ನು ಕಡಿಮೆ ಮಾಡುವ ಕುರಿತು ಸರ್ಕಾರ ಚಿಂತನೆ ನಡೆಸಿದೆಯೇ; (ವಿವರ ನೀಡುವುದು)** | ಹೌದು.<br><br>ಬೆಂಗಳೂರು ನಗರದಲ್ಲಿ ಪ್ರತಿನಿತ್ಯ ಹೆಚ್ಚುತ್ತಿರುವ ಜನಸಂಖ್ಯೆ ಮತ್ತು ವಾಹನ ಸಂಖ್ಯೆಗೆ ಪ್ರಮುಖ ಕಾರಣವಾದ ಆರ್ಥಿಕ ಉದಾರೀಕರಣದ ಪರಿಣಾಮದಿಂದ ಹೊರವಲಯದಲ್ಲಿ ಹೊಸ ಬಡಾವಣೆಗಳ ನಿರ್ಮಾಣ, ಸಣ್ಣ ಮತ್ತು ಮಧ್ಯಮ ಪ್ರಮಾಣದ ಕೈಗಾರಿಕೆಗಳ ಸ್ಥಾಪನೆ, ಮಾಹಿತಿ/ಜೈವಿಕ ತಂತ್ರಜ್ಞಾನ ಸಂಸ್ಥೆಗಳ ಸ್ಥಾಪನೆ ಇವೆಲ್ಲದರ ನೇರ ಪರಿಣಾಮವಾಗಿ ಸರಕು ಸಾಗಣೆ ವಾಹನಗಳ ಸಂಚಾರ ನಗರದ ಒಳಭಾಗದಲ್ಲಿ ಹೆಚ್ಚುತ್ತಲೇ ಇದೆ.<br>ಈ ಕೈಗಾರಿಕೆಗಳು/ಸಂಸ್ಥೆಗಳಿಗೆ ಅವಶ್ಯಕವಾದ ಸರಕುಗಳನ್ನು ಪೂರೈಸಲು ಎಲ್ಲಾ ರೀತಿಯ ಸರಕು ಸಾಗಣೆ ವಾಹನಗಳು ನಗರದ ಒಳಭಾಗಗಳಲ್ಲಿ ಪ್ರವೇಶಿಸಿ, ಒಳರಸ್ತೆಗಳಲ್ಲಿ ಹಾದುಹೋಗಿ ನಿಲುಗಡೆ ಮಾಡುತ್ತಿರುವುದು ಇತರೆ ವಾಹನಗಳ ಸುಗಮ ಸಂಚಾರಕ್ಕೆ ಧಕ್ಕೆಯಾಗುವ ಜೊತೆಗೆ ರಸ್ತೆ ಅಪಘಾತಗಳಲ್ಲಿ ಈ ವಾಹನಗಳ ಪಾಲ್ಗೊಳ್ಳುವಿಕೆ ಹೆಚ್ಚುತ್ತಿರುವುದಲ್ಲದೆ ನಗರದ ಒಳಭಾಗಗಳಲ್ಲಿ ವಾಯು ಹಾಗೂ ಶಬ್ದಮಾಲಿನ್ಯ ಹೆಚ್ಚಳಕ್ಕೆ ಕಾರಣವಾಗುತ್ತಿದೆ.<br>ಈ ಸಮಸ್ಯೆಗಳನ್ನು ಗಂಭೀರವಾಗಿ ಪರಿಗಣಿಸಿ ಸಾರ್ವಜನಿಕ ಹಿತಾಸಕ್ತಿ ಹಾಗೂ ಸುರಕ್ಷತಾ ಸಂಚಾರ ದೃಷ್ಟಿಯಿಂದ ನಗರದ ಒಳಭಾಗದಲ್ಲಿ ಇತರೆ ಸಾರ್ವಜನಿಕ ವಾಹನಗಳ ಸುಗಮ ಸಂಚಾರಕ್ಕೆ ಅನುವು ಮಾಡಿಕೊಡುವ ಸಲುವಾಗಿ ಹಾಗೂ ರಸ್ತೆ ಬಳಕೆದಾರರ ಸುರಕ್ಷತೆ ದೃಷ್ಟಿಯಿಂದ ಬೆಳಿಗ್ಗೆ 07-00 ಗಂಟೆಯಿಂದ 11-00 ಗಂಟೆಯವರೆಗೆ ಹಾಗೂ ಸಂಜೆ 04-00 ಗಂಟೆಯಿಂದ ರಾತ್ರಿ 10-00 ಗಂಟೆಯವರೆಗೆ ಪೋಲೀಸ್ ಆಯುಕ್ತರ ಸರಹದ್ದಿಗೆ ಒಳಪಡುವ ಎಲ್ಲಾ ರಸ್ತೆಗಳಲ್ಲಿಯೂ ಸರಕು ಸಾಗಣೆ ವಾಹನಗಳ ಪ್ರವೇಶ ಹಾಗೂ ಸಂಚಾರವನ್ನು ನಿರ್ಬಂಧಿಸಲಾಗಿದೆ. |
| (ಈ) | **ಸದರಿ ಸಮಯದಲ್ಲಿ ಅನ್ಯ ಜಿಲ್ಲೆ/ ಅನ್ಯ ರಾಜ್ಯಗಳಿಂದ ಬೆಂಗಳೂರು** | ಈ ನಿಟ್ಟಿನಲ್ಲಿ ಸರ್ಕಾರ ಚಿಂತನೆ ನಡೆಸಿದ್ದು ಅನ್ಯ ಜಿಲ್ಲೆ/ಅನ್ಯ ರಾಜ್ಯಗಳಿಂದ ಬರುವ ಸರಕು ಸಾಗಣೆ ವಾಹನಗಳು ಬೆಂಗಳೂರು |

| | | |
|---|---|---|
| | ನಗರಕ್ಕೆ ಬರುವ ಎಲ್ಲಾ ರೀತಿಯ ವಾಹನಗಳನ್ನು ಬೆಂಗಳೂರು ನಗರದ ಹೊರವಲಯದಲ್ಲಿ ನಿಲ್ಲಿಸಿ ನಗರದ ಸಂಚಾರ ದಟ್ಟಣೆಯನ್ನು ಕಡಿಮೆ ಮಾಡುವ ವಿಷಯದ ಕುರಿತು ಸರ್ಕಾರ ಚಿಂತನೆ ನಡೆಸಿದೆಯೇ? (ವಿವರ ನೀಡುವುದು) | ನಗರ ಪ್ರವೇಶವನ್ನು ಪೀಕ್‌ಅವರ್ಸ್ ವೇಳೆಯಲ್ಲಿ ಬೆಳಿಗ್ಗೆ 07–00 ಗಂಟೆಯಿಂದ 11–00 ಗಂಟೆಯವರೆಗೆ ಹಾಗೂ ಸಂಜೆ 04–00 ಗಂಟೆಯಿಂದ ರಾತ್ರಿ 10–00 ಗಂಟೆಯವರೆಗೆ ನಿರ್ಬಂಧಿಸಿ ಅಧಿಸೂಚನೆ ಹೊರಡಿಸಲಾಗಿರುತ್ತದೆ. |

**ಹೆಚ್‌ಡಿ 79 ಎಸ್‌ಎಸ್‌ಟಿ 2021**

(ಬಸವರಾಜ ಬೊಮ್ಮಾಯಿ)
ಗೃಹ ಸಚಿವರು